# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2217
ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಪುಟ್ಟಣ್ಣ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 26.03.2021
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಹಂಸಧ್ವನಿ ಕಿವುಡ ಮಕ್ಕಳ ಶಾಲೆಯನ್ನು ಸರ್ಕಾರವು ದಿನಾಂಕ:23.07.2016ರ ಆದೇಶ ಸಂಖ್ಯೆ:ಮಮಇ 389 ಪಿಹೆಚ್‌ಪಿ 2014 ರಲ್ಲಿ ವಶಕ್ಕೆ ಪಡೆದು, ವಸತಿ ಶಾಲೆಯನ್ನಾಗಿ ಮಾರ್ಪಡಿಸಿದ್ದು, ಸದರಿ ಶಾಲೆಗೆ 20 ಹುದ್ದೆಗಳನ್ನು ದಿನಾಂಕ:28.03.1988 ರಲ್ಲಿ ಮಂಜೂರು ಮಾಡಿರುವುದು ನಿಜವೇ; | ಹಂಸಧ್ವನಿ ಕಿವುಡ ಮತ್ತು ಮೂಕ ಮಕ್ಕಳ ಶಾಲೆಯನ್ನು ಸರ್ಕಾರವು ದಿನಾಂಕ:23.07.2016ರ ಆದೇಶ ಸಂಖ್ಯೆ:ಮಮಇ 389 ಪಿಹೆಚ್‌ಪಿ 2014 ರಲ್ಲಿ ವಶಕ್ಕೆ ಪಡೆದು, ವಸತಿ ಶಾಲೆಯನ್ನಾಗಿ ಮಾರ್ಪಡಿಸಲಾಗಿದೆ.<br><br>ಸದರಿ ಶಾಲೆಗೆ 20 ಹುದ್ದೆಗಳನ್ನು ದಿನಾಂಕ:28.03.1988 ರಲ್ಲಿ ಮಂಜೂರು ಮಾಡಲಾಗಿದೆ. |
| ಆ) | ಆರ್ಥಿಕ ಇಲಾಖೆಯು ದಿ:17.07.2019 ರಲ್ಲಿ ಸಿಬ್ಬಂದಿಗಳನ್ನು ಇಲಾಖೆಯ ವೃಂದ ಮತ್ತು ನಿಯವಗಳಲ್ಲಿ ವಿಲೀನಗೊಳಿಸಲು ಸಹಮತಿ ನೀಡಿ ಮಾನ್ಯ ಇಲಾಖೆಯ ವೃಂದ ಮತ್ತು ನಿಯಮಗಳಲ್ಲಿ ವಿಲೀನಗೊಳಿಸಲು ಸಹಮತಿ ನೀಡಿ ಮಾನ್ಯ ಸಚಿವರು ಭರವಸೆ ಸಂಖ್ಯೆ: ಮಮಇ 30 ಪಿಹೆಚ್‌ಪಿ 2021 ರಲ್ಲಿ 3 ತಿಂಗಳಲ್ಲಿ ಸದರಿ ಶಾಲೆಯ ಸಿಬ್ಬಂದಿಗಳನ್ನು ವಿಶೇಷ ವಿಲೀನಾತಿ ನಿಯಮಗಳನ್ನು ರೂಪಿಸಿ, ಇಲಾಖೆಯಲ್ಲಿ ವಿಲೀನಗೊಳಿಸಿರುವುದಾಗಿ ಸದನದಲ್ಲಿ ಭರವಸೆ ನೀಡಲಾಗಿದೇಯೇ; | ಹೌದು |
| ಇ) | ಮಾನ್ಯ ಸಚಿವರ ಭರವಸೆಯಂತೆ, ಇಲಾಖೆಯು ಸದರಿ ಸಿಬ್ಬಂದಿಗಳಿಗೆ ಜೇಷ್ಠತೆಯನ್ನು ನಿಗದಿಪಡಿಸಲಾಗಿದೆಯೇ; (ವಿವರಗಳನ್ನು ಒದಗಿಸುವುದು) | ಹಂಸಧ್ವನಿ ಕಿವುಡ ಮತ್ತು ಮೂಕ ಮಕ್ಕಳ ಶಾಲೆ. ಇಂದಿರಾನಗರ ಸಂಸ್ಥೆಯ ಸಿಬ್ಬಂದಿಗಳ ಸೇವೆಗಳನ್ನು ಕ್ರಮಬದ್ಧಗೊಳಿಸಿ ಜೇಷ್ಠತೆಯನ್ನು ನಿಗದಿಪಡಿಸಬೇಕಾಗಿದ್ದು ಈ ಬಗ್ಗೆ ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ ಆರ್ಥಿಕ ಇಲಾಖೆ ಮತ್ತು ಕಾನೂನು ಕೋಶದ ಪ್ರತಿನಿಧಿಗಳೊಂದಿಗೆ ಚರ್ಚಿಸಿದ್ದು, ಸಿಬ್ಬಂದಿಗಳ ಸೇವೆ ಕ್ರಮಬದ್ಧಗೊಳಿಸುವ ಕುರಿತು ತೀರ್ಮಾನಿಸಿದ ನಂತರ ಪರಿಶೀಲಿಸಲಾಗುವುದು. |
| ಈ) | ಜೇಷ್ಠತೆಯನ್ನು ಇಲಾಖೆಯ ಅಧಿಕಾರಿಗಳ ನಿರ್ಲಕ್ಷ್ಯತೆಯಿಂದ ನಿಗದಿಗೊಳಿಸದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಜೇಷ್ಠತೆಯನ್ನು ನಿಗದಿಪಡಿಸಲಾಗುವುದು? (ನಿರ್ದಿಷ್ಟ ಸಮಯವನ್ನು ತಿಳಿಸುವುದು) | ಪ್ರಸ್ತುತ ಸಿಬ್ಬಂದಿಗಳ ಸೇವೆಯನ್ನು ಕ್ರಮಬದ್ಧಗೊಳಿಸುವ ಬಗ್ಗೆ ಕ್ರಮವಹಿಸಲಾಗುತ್ತಿದ್ದು, ತದ ನಂತರ ಸಿಬ್ಬಂದಿಗಳ ಜೇಷ್ಠತೆಯನ್ನು ನಿಗದಿಪಡಿಸಲಾಗುವುದು. |

**ಸಂಖ್ಯೆ: ಮಮಇ 106 ಪಿಹೆಚ್‌ಪಿ 2021**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ
ಇಲಾಖೆ ಸಚಿವರು